# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1194 |
| ಸದಸ್ಯರ ಹೆಸರು | : | ಶ್ರೀ ಎನ್. ಅಪ್ಪಾಜಿಗೌಡ |
| ಉತ್ತರಿಸುವ ದಿನಾಂಕ | : | 20.12.2018 |
| ಉತ್ತರಿಸುವ ಸಚಿವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಲ್ಲಿ ಜಿಲ್ಲಾ ಪುನರ್ವಸತಿ ಕೇಂದ್ರ ಟಿ.ನರಸೀಪುರ ಇಲ್ಲಿಂದ ವಿಲೀನಗೊಂಡ ತಾತ್ಕಾಲಿಕ ನೌಕರರ ಸಂಖ್ಯೆ ಎಷ್ಟು; ಈ ಪೈಕಿ ಈವರೆಗೆ ನಿವೃತ್ತಿಗೊಂಡ ನೌಕರರೆಷ್ಟು? | **1.** ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಗೆ ಜಿಲ್ಲಾ ಪುನರ್ವಸತಿ ಕೇಂದ್ರ, ಟಿ.ನರಸೀಪುರ ಇಲ್ಲಿಂದ ಸರ್ಕಾರದ ಆದೇಶ ಸಂಖ್ಯೆ:**WCD 178 PHP 2004,** ದಿನಾಂಕ: 16.11.2007ರಂತೆ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ಹುದ್ದೆಗಳಲ್ಲಿ ದಿನಾಂಕ 01.04.2006ರಿಂದ ಅನ್ವಯವಾಗುವಂತೆ 21 ಅಧಿಕಾರಿ /ಸಿಬ್ಬಂದಿಗಳನ್ನು ತಾತ್ಕಾಲಿಕವಾಗಿ ಕರ್ನಾಟಕ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಸೇವೆಗಳಲ್ಲಿ ಅವರುಗಳ ವಯೋ ನಿವೃತ್ತಿಯವರೆಗೆ ಮುಂದುವರೆಸಿ ಆದೇಶಿಸಲಾಗಿರುತ್ತದೆ. ಆದೇಶದ ಪ್ರತಿಯನ್ನು "ಅನುಬಂಧ-1" ರಲ್ಲಿ ಲಗತ್ತಿಸಲಾಗಿದೆ.<br><br>**2.** ಆದರೆ, ಅವರುಗಳು ಈ ಹಿಂದೆ ಸಲ್ಲಿಸಿದ ಸೇವಾವಧಿಯನ್ನು ವೇತನ ಬಡ್ತಿ ಹಾಗೂ ನಿವೃತ್ತಿ ವೇತನ ಸೌಲಭ್ಯಗಳಿಗೆ ಪರಿಗಣಿಸುವ ಬಗ್ಗೆ ಸದರಿ ಆದೇಶದಲ್ಲಿ ಯಾವುದೇ ಸ್ಪಷ್ಟ ನಮೂದು ಇರುವುದಿಲ್ಲವೆಂದು 21 ಅಧಿಕಾರಿ/ ನೌಕರರುಗಳ ಪೈಕಿ 07 ಮಂದಿ ಮಾತ್ರ ದಿನಾಂಕ:16.11.2007ರ ಸರ್ಕಾರದ ಆದೇಶವನ್ನು ಪ್ರಶ್ನಿಸಿ ನ್ಯಾಯಾಲಯದ ಮೊರೆ ಹೋಗಿದ್ದು, ಸರ್ವೋಚ್ಛ ನ್ಯಾಯಾಲಯದ ತೀರ್ಮಾನದಂತೆ, ಈ 7 ಅಧಿಕಾರಿ /ಸಿಬ್ಬಂದಿಗಳ ಸೇವಾವಧಿಯನ್ನು ವೇತನ ಬಡ್ತಿ ಹಾಗೂ ನಿವೃತ್ತಿ ವೇತನ ಸೌಲಭ್ಯಗಳಿಗೆ ಪರಿಗಣಿಸಲು ಸೂಚಿಸಿ ಸರ್ಕಾರವು ಪರಿಷ್ಕೃತ ಆದೇಶ ಸಂಖ್ಯೆ: **WCD 178 PHP 2004,** ದಿನಾಂಕ:08.04.2008ರಲ್ಲಿ ತಿಳಿಸಿರುತ್ತದೆ. ಮುಂದುವರೆದು, ಈ 7 ಮಂದಿ ನೌಕರರಿಗೆ ಅವರು ಸೇವೆಗೆ ವಿಲೀನವಾದ ದಿನದಿಂದ ವಿಶೇಷ ನಿಯಮಾವಳಿಗಳನ್ನು ರಚಿಸಿ ಸೇವಾ ಹಿರಿತನವನ್ನು ಪರಿಗಣಿಸುವ ಬಗ್ಗೆಯೂ ತಿಳಿಸಲಾಗಿರುತ್ತದೆ. ಸದರಿ ಆದೇಶವನ್ನು "ಅನುಬಂಧ-2" ರಲ್ಲಿ ಲಗತ್ತಿಸಲಾಗಿದೆ. |

| | | |
|---|---|---|
| | | 3. ಅನುಬಂಧ-1ರಲ್ಲಿ ತಿಳಿಸಿರುವ ಈ 21 ಅಧಿಕಾರಿ/ನೌಕರರ ಪೈಕಿ ನಿವೃತ್ತಿಗೊಂಡವರು 06 ಮತ್ತು ಕರ್ತವ್ಯಕ್ಕೆ ವರದಿ ಮಾಡಿಕೊಂಡು, ಸ್ವಯಂ ನಿವೃತ್ತಿ ನೀಡುವಂತೆ ಮನವಿ ಸಲ್ಲಿಸಿದವರು 01, ಮರಣ ಹೊಂದಿದವರು 02, ಹಾಲಿ ಕರ್ತವ್ಯ ನಿರ್ವಹಿಸುತ್ತಿರುವವರ ಸಂಖ್ಯೆ 12. (ವಿವರಗಳನ್ನು ಅನುಬಂಧ-3ರಲ್ಲಿ ವಿವರಿಸಿದೆ) |
| ಆ) | ಸದರಿ ತಾತ್ಕಾಲಿಕ ನೌಕರರು ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಲ್ಲಿ ವಿಲೀನಗೊಳ್ಳುವ ಸಮಯದಲ್ಲಿ ಇದ್ದಂತಹ ವೇತನ ಮತ್ತು ಪದನಾಮಗಳೇನು: (ವಿವರ ನೀಡುವುದು) ಹಾಗೂ ಪ್ರಸ್ತುತ ಸೇವೆಯಲ್ಲಿರುವ ಈ ತಾತ್ಕಾಲಿಕ ನೌಕರರ ವೇತನ ಮತ್ತು ಪದನಾಮಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಗೆ ಜಿಲ್ಲಾ ಪುನರ್ವಸತಿ ಕೇಂದ್ರ, ಟಿ.ನರಸೀಪುರ ಇಲ್ಲಿಂದ ಬಂದಂತಹ 21 ಅಧಿಕಾರಿ/ನೌಕರರುಗಳು ಕರ್ತವ್ಯಕ್ಕೆ ಹಾಜರಾದ ಸಮಯದಲ್ಲಿ ಇದ್ದಂತಹ ವೇತನ ಶ್ರೇಣಿ, ವೇತನ ಮತ್ತು ಪದನಾಮ ಹಾಗೂ ಪ್ರಸ್ತುತ ಸೇವೆಯಲ್ಲಿ ಪಡೆಯುತ್ತಿರುವ ವೇತನ ಶ್ರೇಣಿ, ವೇತನ ಮತ್ತು ಪದನಾಮಗಳ ವಿವರಗಳನ್ನು "ಅನುಬಂಧ-3" ರಲ್ಲಿ ವಿವರಿಸಲಾಗಿದೆ. |
| ಇ) | ಈ ಎಲ್ಲಾ ತಾತ್ಕಾಲಿಕ ನೌಕರರ ವಿಲೀನಗೊಂಡ ನಂತರ ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಇವರಿಗೆ ಮುಂಬಡ್ತಿ ನೀಡುವ ಅವಕಾಶವಿದೆಯೇ: (ಪೂರ್ಣ ಮಾಹಿತಿ ನೀಡುವುದು) | 1. ಈ 21 ಜನರಿಗೆ ಸರ್ಕಾರದ ಆದೇಶ ಸಂಖ್ಯೆ:WCD 178 PHP 2004, ದಿನಾಂಕ: 16.11.2007ರ ಪ್ರಕಾರ ವೇತನ ಬಡ್ತಿ, ನಿವೃತ್ತಿ ಉಪದಾನಗಳನ್ನು ಹಾಗೂ ಮುಂಬಡ್ತಿ ನೀಡಲು ಯಾವುದೇ ಅವಕಾಶಗಳನ್ನು ಕಲ್ಪಿಸಿರುವುದಿಲ್ಲ.<br>2. ಆದರೆ, ಮೇಲಿನ ಹಳೆಯ ಆದೇಶವನ್ನು ಪ್ರಶ್ನಿಸಿ 07 ಮಂದಿ ನ್ಯಾಯಾಲಯದ ಮೊರೆ ಹೋದ ಸಂದರ್ಭದಲ್ಲಿ ಸರ್ವೋಚ್ಚ ನ್ಯಾಯಾಲಯದ ತೀರ್ಮಾನದಂತೆ, ಅನುಬಂಧ-2ರಲ್ಲಿ ತಿಳಿಸಿರುವ 7 ಜನರ ಸೇವಾವಧಿಯನ್ನು ವೇತನ ಬಡ್ತಿ ಹಾಗೂ ನಿವೃತ್ತಿ ವೇತನ ಸೌಲಭ್ಯಗಳಿಗೆ ಪರಿಗಣಿಸಲು ಸೂಚಿಸಿ ಸರ್ಕಾರವು ಆದೇಶ ಸಂಖ್ಯೆ: **WCD 178 PHP 2004,** ದಿನಾಂಕ:08.04.2008ರಲ್ಲಿ ಕರ್ನಾಟಕ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಸೇವೆಗಳಲ್ಲಿ ವಿಲೀನವಾದ ದಿನಾಂಕದಿಂದ ಅವರಿಗೆ ವಿಶೇಷ ನಿಯಮಾವಳಿಗಳನ್ನು ರಚಿಸಿದ ನಂತರ ಜೇಷ್ಠತೆಯನ್ನು ನೀಡಬೇಕಾಗುತ್ತದೆ ಎಂಬ ಅರ್ಥದಲ್ಲಿ ತಿಳಿಸಲಾಗಿರುತ್ತದೆ. ಆದರೆ ಮುಂಬಡ್ತಿಗೆ ಅವಕಾಶವನ್ನು ಈ 7 ಜನರಿಗೂ ಕಲ್ಪಿಸಿರುವುದಿಲ್ಲ. |

| | | |
|---|---|---|
| ಈ) | ತಾತ್ಕಾಲಿಕ ನೌಕರರು ಸೇವೆಯಲ್ಲಿದ್ದಾಗ ನಿಧನಗೊಂಡಲ್ಲಿ ಅವರ ಅವಲಂಬಿತರಿಗೆ ಸರ್ಕಾರಿ/ತಾತ್ಕಾಲಿಕ ನೌಕರಿ ನೀಡಲಾಗುವುದೇ (ಸಂಪೂರ್ಣ ಮಾಹಿತಿ ನೀಡುವುದು) | ಇಂತಂಹ ಪ್ರಕರಣದ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಹಾಗೂ ಕಾನೂನು ಇಲಾಖೆಗಳೊಂದಿಗೆ ಸಮಾಲೋಚನೆ ನಡೆಸುವ ಪ್ರಕ್ರಿಯೆ ಚಾಲ್ತಿಯಲ್ಲಿದೆ. ಈ ಬಗ್ಗೆ ಎರಡೂ ಇಲಾಖೆಗಳ ಅಭಿಪ್ರಾಯದನ್ವಯ ಸೂಕ್ತ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಮಮಇ 378 ಎಸ್‌ಜೆಡಿ 2018

(ಡಾ: ಜಯಮಾಲ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ, ಕನ್ನಡ ಮತ್ತು ಸಂಸ್ಕೃತಿ ಸಚಿವರು.

ಡಾ. ಜಯಮಾಲಾ, ಎಂ.ಎ. ಪಿಹೆಚ್.ಡಿ